# ಕರ್ನಾಟಕ ವಿಧಾನ ಪರಿಷತ್

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | | 828(871) |
| ಸದಸ್ಯರ ಹೆಸರು | | ಶ್ರೀ ಪ್ರತಾಪ್ ಸಿಂಹ ನಾಯಕ್ ಕೆ (ವಿಧಾನ ಸಭೆಯಿಂದ ಚುನಾಯಿತರಾದವರು) |
| ಉತ್ತರಿಸಬೇಕಾದ ದಿನಾಂಕ | | 28.09.2020 |
| ಉತ್ತರಿಸಬೇಕಾದ ಸಚಿವರು | | ಉಪ ಮುಖ್ಯಮಂತ್ರಿಗಳು (ಉನ್ನತ ಶಿಕ್ಷಣ) |
| ಪ್ರಶ್ನೆ | | ಉತ್ತರ |
| ಅ) | ರಾಜ್ಯದ ಪದವಿ ಕಾಲೇಜುಗಳಲ್ಲಿ ಕೆಲಸ ಮಾಡುತ್ತಿರುವ ಅತಿಥಿ ಉಪನ್ಯಾಸಕರ ಸಂಖ್ಯೆ ಎಷ್ಟು; ಈ ವರ್ಷ ಇನ್ನು ನೇಮಕಾತಿ ಆಗಿಲ್ಲದಿರುವುದರಿಂದ ಕಳೆದ ಸಾಲಿನ ವಿವರ ನೀಡುವುದು;(2019-2020) | ಪ್ರಸ್ತುತ ಕೋವಿಡ್-19 ಹಿನ್ನಲೆಯಲ್ಲಿ ಕಾಲೇಜುಗಳಲ್ಲಿ ತರಗತಿಗಳು ಇನ್ನು ಪ್ರಾರಂಭವಾಗದೇ ಇರುವುದರಿಂದ 2020-21ನೇ ಸಾಲಿನಲ್ಲಿ ಅತಿಥಿ ಉಪನ್ಯಾಸಕರುಗಳನ್ನು ಆಯ್ಕೆ ಮಾಡಿಕೊಂಡಿರುವುದಿಲ್ಲ.<br><br>ಕಳೆದ 2019-20ನೇ ಸಾಲಿನಲ್ಲಿ ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳಲ್ಲಿ ಕರ್ತವ್ಯ ನಿರ್ವಹಿಸಿದ್ದ ಅತಿಥಿ ಉಪನ್ಯಾಸಕರ ಒಟ್ಟು ಸಂಖ್ಯೆ : 14447 (ಅನುಬಂಧದಲ್ಲಿ ವಿವರಿಸಿದೆ) |
| ಆ) | 2019-2020ನೇ ಸಾಲಿನಲ್ಲಿ ರಾಜ್ಯದ ಪದವಿ ಕಾಲೇಜುಗಳಲ್ಲಿ ಒಟ್ಟು ನೇಮಕಗೊಂಡಿರುವ ಉಪನ್ಯಾಸಕರ ಸಂಖ್ಯೆ ಎಷ್ಟು; (ವಿವರ ನೀಡುವುದು) | |
| ಇ) | ರಾಜ್ಯದಲ್ಲಿ ಸೃಜಿಸಲಾಗಿರುವ ಒಟ್ಟು ಉಪನ್ಯಾಸಕರ ಹುದ್ದೆಗಳು ಎಷ್ಟು; ಖಾಲಿ ಹುದ್ದೆಗಳನ್ನು ತುಂಬಲು ಕೈಗೊಂಡಿರುವ ಕ್ರಮಗಳೇನು; (ವಿವರ ನೀಡುವುದು) | ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳಲ್ಲಿ ವಿವಿಧ ವಿಷಯಗಳಲ್ಲಿ ಒಟ್ಟು-7600 ಸಹಾಯಕ ಪ್ರಾಧ್ಯಾಪಕರ ಹುದ್ದೆಗಳು ಮಂಜೂರಾಗಿದ್ದು, ಇದರಲ್ಲಿ ಪ್ರಸ್ತುತ 6152 ಸಹಾಯಕ ಪ್ರಾಧ್ಯಾಪಕರು ಕರ್ತವ್ಯ ನಿರ್ವಹಿಸುತ್ತಿದ್ದಾರೆ. ಉಳಿದಂತೆ ಪ್ರಸ್ತುತ ವಿವಿಧ ವಿಷಯಗಳಲ್ಲಿ ಖಾಲಿ ಇರುವ 1448 ಸಹಾಯಕ ಪ್ರಾಧ್ಯಾಪಕರ ಹುದ್ದೆಗಳಲ್ಲಿ 1242 ಹುದ್ದೆಗಳನ್ನು ಭರ್ತಿ ಮಾಡಲು ಆರ್ಥಿಕ ಇಲಾಖೆಯು ಅನುಮತಿ ನೀಡಿರುತ್ತದೆ. ಸದರಿ ಹುದ್ದೆಗಳನ್ನು ಯು.ಜಿ.ಸಿ. ನಿಯಮಾವಳಿಗಳನ್ವಯ ನೇರ ನೇಮಕಾತಿ ಮೂಲಕ ಭರ್ತಿ ಮಾಡಲು ಸರ್ಕಾರದ ಅಧಿಸೂಚನೆ ಸಂಖ್ಯೆ:ಇಡಿ/257/ಡಿಸಿಇ/2019(ಭಾ-3) ದಿನಾಂಕ:08.07.2020 ರಲ್ಲಿ ಅಂತಿಮ ವಿಶೇಷ ನೇಮಕಾತಿ ನಿಯಮಗಳನ್ನು ಹೊರಡಿಸಲಾಗಿದೆ.<br>ಪ್ರಸ್ತುತ ಕೋವಿಡ್-19 ಹಿನ್ನೆಲೆಯಲ್ಲಿ 2020-21ನೇ ಸಾಲಿನಲ್ಲಿ ಯಾವುದೇ ನೇರ ನೇಮಕಾತಿಯನ್ನು ಕೈಗೊಳ್ಳುವಂತಿಲ್ಲ ಎಂಬುದಾಗಿ ಆರ್ಥಿಕ ಇಲಾಖೆಯ ಸುತ್ತೋಲೆ ಸಂಖ್ಯೆ:ಆಇ/03/ಬಿಇಎಂ/2020, ದಿನಾಂಕ: 06.07.2020 ರಲ್ಲಿ ನಿರ್ಬಂಧಿಸಲಾಗಿದೆ.<br>ಆದಾಗ್ಯೂ, ಪ್ರಾಂಶುಪಾಲರು ಹಾಗೂ ಸಹಾಯಕ ಪ್ರಾಧ್ಯಾಪಕರ ಖಾಲಿ ಹುದ್ದೆಗಳನ್ನು ಭರ್ತಿ ಮಾಡುವ ಸಂಬಂಧ ನೇಮಕಾತಿ ಪ್ರಕ್ರಿಯೆಯನ್ನು ಕೈಗೊಳ್ಳಲು ಅನುಮತಿ ನೀಡುವಂತೆ ಆರ್ಥಿಕ ಇಲಾಖೆಯನ್ನು ಕೋರಲಾಗಿದೆ. |
| ಈ) | ರಾಜ್ಯದಲ್ಲಿ ಸರ್ಕಾರಿ ಪದವಿ ಕಾಲೇಜುಗಳು, ಅನುದಾನಿತ ಪದವಿ ಕಾಲೇಜುಗಳ ಹಾಗೂ ಖಾಸಗಿ ಪದವಿ ಕಾಲೇಜುಗಳ ಸಂಖ್ಯೆ ಎಷ್ಟು; ಅವುಗಳಲ್ಲಿ ಅಭ್ಯಾಸ ಮಾಡುತ್ತಿರುವ ವಿದ್ಯಾರ್ಥಿಗಳ ಸಂಖ್ಯೆ ಎಷ್ಟು; | ಕಾಲೇಜು ಶಿಕ್ಷಣ ಇಲಾಖಾ ವ್ಯಾಪ್ತಿಯಲ್ಲಿ ಬರುವ ಸರ್ಕಾರಿ ಮತ್ತು ಅನುದಾನಿತ ಕಾಲೇಜುಗಳ ಸಂಖ್ಯೆ ಮತ್ತು ವಿದ್ಯಾರ್ಥಿಗಳ ಸಂಖ್ಯಾ ವಿವರ ಈ ಕೆಳಕಂಡಂತಿದೆ. |

| ಕ್ರ ಸಂ | ಕಾಲೇಜುಗಳು | ಸರ್ಕಾರಿ ಕಾಲೇಜುಗಳ ಸಂಖ್ಯೆ | ಸರ್ಕಾರಿ ಕಾಲೇಜುಗಳಲ್ಲಿ ಅಭ್ಯಾಸ ಮಾಡುತ್ತಿರುವ ವಿದ್ಯಾರ್ಥಿಗಳ ಸಂಖ್ಯೆ | ಅನುದಾನಿತ ಕಾಲೇಜುಗಳ ಸಂಖ್ಯೆ | ಅನುದಾನಿತ ಕಾಲೇಜುಗಳಲ್ಲಿ ಅಭ್ಯಾಸ ಮಾಡುತ್ತಿರುವ ವಿದ್ಯಾರ್ಥಿಗಳ ಸಂಖ್ಯೆ |
|---|---|---|---|---|---|
| 1 | ಪದವಿ ಕಾಲೇಜುಗಳು | 422 | 344632 | 320 | 190151 |
| 2 | ಕಾನೂನು ಕಾಲೇಜುಗಳು | 06 | 1136 | 27 | 9240 |

| | | | | | |
|---|---|---|---|---|---|
| 3 | ಬಿ.ಎಡ್. ಕಾಲೇಜುಗಳು | 0 | – | 53 | 5575 |
| 4 | ಚಿತ್ರಕಲಾ ಕಾಲೇಜುಗಳು | 02 | 53 | 23 | 1043 |
| | ಒಟ್ಟು | 430 | 345821 | 423 | 206009 |

ಖಾಸಗಿ ಪದವಿ ಕಾಲೇಜುಗಳು ಕಾಲೇಜು ಶಿಕ್ಷಣ ಇಲಾಖಾ ವ್ಯಾಪ್ತಿಗೆ ಒಳಪಡುವುದಿಲ್ಲ.

| | | |
|---|---|---|
| ಉ) | ಅನೇಕ ವರ್ಷಗಳಿಂದ ಅತಿಥಿ ಉಪನ್ಯಾಸಕರುಗಳಾಗಿ ಎಲ್ಲಾ ಅರ್ಹತೆಗಳೊಂದಿಗೆ ಕಾರ್ಯನಿರ್ವಹಿಸುತ್ತಿರುವ ಅತಿಥಿ ಉಪನ್ಯಾಸಕರುಗಳನ್ನು ರೋಷ್ಟರ್ ಹಾಗೂ ಅರ್ಹತೆಯ ಆಧಾರದಲ್ಲಿ ಸೃಜಿಸಲಾಗಿರುವ ಹುದ್ದೆಗಳಲ್ಲಿ ವಿಶೇಷ ಪ್ರಕರಣವೆಂದು ಪರಿಗಣಿಸಿ, ವಿಲೀನಗೊಳಿಸಲು ವಿಶೇಷ ಕಾನೂನು ರಚನೆ ಮಾಡಿ ಅತಿಥಿ ಉಪನ್ಯಾಸಕರುಗಳ ಸಮಸ್ಯೆ ಪರಿಹಾರಕ್ಕೆ ಸರ್ಕಾರ ಕ್ರಮ ಕೈಗೊಳ್ಳಲಿದೆಯೇ; (ವಿವರ ನೀಡುವುದು) | ಅತಿಥಿ ಉಪನ್ಯಾಸಕರುಗಳು ಇಲಾಖೆಯಲ್ಲಿ ಯಾವುದೇ ಮಂಜೂರಾದ ಖಾಲಿ ಹುದ್ದೆಗಳ ಎದುರಾಗಿ ಕರ್ತವ್ಯ ನಿರ್ವಹಿಸುತ್ತಿರುವುದಿಲ್ಲ. ಬದಲಾಗಿ ಆಯಾ ಶೈಕ್ಷಣಿಕ ವರ್ಷದಲ್ಲಿ ಹೆಚ್ಚುವರಿ ಕಾರ್ಯಭಾರಕ್ಕೆ ಮಾತ್ರ ಸೀಮಿತಗೊಳಿಸಿ, ತಾತ್ಕಾಲಿಕವಾಗಿ, ಅತಿಥಿ ಉಪನ್ಯಾಸಕರುಗಳನ್ನು ಆಯ್ಕೆ ಮಾಡಿಕೊಳ್ಳಲಾಗುತ್ತದೆ. ಆದ್ದರಿಂದ ಅವರುಗಳ ತಾತ್ಕಾಲಿಕ ಸೇವೆಯನ್ನು ಪರಿಗಣಿಸಿ ಸೇವಾ ಭದ್ರತೆಯನ್ನು ಒದಗಿಸಿ, ಖಾಯಂ ಮಾಡಲು ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ಅವಕಾಶ ಇರುವುದಿಲ್ಲ.<br><br>ಅತಿಥಿ ಉಪನ್ಯಾಸಕರಾಗಿ ಸೇವೆ ಸಲ್ಲಿಸಿದ್ದ ಶ್ರೀ ವೀರಣ್ಣ ಎಸ್. ಸಜ್ಜನರ್ ಹಾಗೂ ಇತರೆ 15 ಅತಿಥಿ ಉಪನ್ಯಾಸಕರುಗಳು ಕರ್ನಾಟಕ ಆಡಳಿತ ನ್ಯಾಯಮಂಡಳಿಯಲ್ಲಿ ಅರ್ಜಿ ಸಂಖ್ಯೆ:4625-4640/2012ನ್ನು ದಾಖಲಿಸಿ, ತಮ್ಮ ಸೇವೆಯನ್ನು ಸಕ್ರಮಾತಿಗೊಳಿಸುವಂತೆ ಹಾಗೂ ಸರ್ಕಾರಿ ಕಾಲೇಜುಗಳಲ್ಲಿ ಖಾಲಿ ಇರುವ ಉಪನ್ಯಾಸಕರ ಹುದ್ದೆಯಲ್ಲಿ ತಮ್ಮನ್ನು ನೇಮಕ ಮಾಡುವಂತೆ ಸರ್ಕಾರ ಹಾಗೂ ಇಲಾಖೆಗೆ ನಿರ್ದೇಶನ ನೀಡುವಂತೆ ಕೋರಿದ್ದರು. ಸದರಿ ಅರ್ಜಿಯನ್ನು ಪರಿಶೀಲಿಸಿದ ಮಾನ್ಯ ನ್ಯಾಯಮಂಡಳಿಯು ಮಾನ್ಯ ಸರ್ವೋಚ್ಛ ನ್ಯಾಯಾಲಯದ ಸಂವಿಧಾನ ಪೀಠವು ಉಮಾದೇವಿ ಪ್ರಕರಣದಲ್ಲಿ ತಾತ್ಕಾಲಿಕ ನೌಕರರನ್ನು ಅವರ ಸೇವಾವಧಿಯನ್ನು ಆಧರಿಸಿ ಸೇವಾ ಸಕ್ರಮಾತಿಗೆ ಪರಿಗಣಿಸಲು ಅರ್ಹರಾಗಿರುವುದಿಲ್ಲವೆಂದು, ಹಾಗೆಯೆ ನೇಮಕಾತಿ ನಿಯಮಗಳಂತೆ ನೇಮಕಾತಿ ಆಗದಿರುವ ವ್ಯಕ್ತಿಗಳಿಗೆ ಸಕ್ರಮಾತಿಯ ಹಕ್ಕು ದೊರೆಯುವುದಿಲ್ಲವೆಂದು ಹಾಗೂ ಇಂತಹ ನಿಯಮಬಾಹಿರ ನೇಮಕಾತಿಯನ್ನು ಸಕ್ರಮಾತಿಗೊಳಿಸಬಾರದೆಂದು ತಿಳಿಸಿರುವ ನಿಲುವನ್ನು ಆಧರಿಸಿ ಸದರಿ ಅರ್ಜಿಯನ್ನು ದಿನಾಂಕ:28.03.2013 ರಂದು ವಜಾಗೊಳಿಸಿದೆ.<br><br>ಮುಂದುವರೆದು, ಮಾನ್ಯ ಸರ್ವೋಚ್ಛ ನ್ಯಾಯಾಲಯದ ಸಂವಿಧಾನ ಪೀಠವು ಉಮಾದೇವಿ ಪ್ರಕರಣದಲ್ಲಿ ನಿಯಮಬಾಹಿರ ನೇಮಕಾತಿಗಳನ್ನು ಸಕ್ರಮಾತಿಗೊಳಿಸಬಾರದೆಂಬ ನಿಲುವನ್ನು ಇತ್ತೀಚೆಗೆ **State of Jammu & Kashmir & Others Vs District Bar Association, Bandipora** ಪ್ರಕರಣದಲ್ಲಿ ಸಹ ಪುನರುಚ್ಛರಿಸಿರುತ್ತದೆ.<br><br>ಅಲ್ಲದೇ, ಅತಿಥಿ ಉಪನ್ಯಾಸಕರಾಗಿ ಸೇವೆ ಸಲ್ಲಿಸಿದ್ದ ಶ್ರೀ ಜಯಚಂದ್ರ ಮತ್ತು ಇತರರು ಯು.ಜಿ.ಸಿ. ಮಾರ್ಗಸೂಚಿಯಂತೆ ವೇತನ ಮತ್ತು ವೃತ್ತಿ ಪದೋನ್ನತಿ ನೀಡುವಂತೆ ಹಾಗೂ ತಮ್ಮ ಸೇವೆಯನ್ನು ಸಕ್ರಮಾತಿಗೊಳಿಸುವಂತೆ ನಿರ್ದೇಶನ ಕೋರಿ ಮಾನ್ಯ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯಲ್ಲಿ ಅರ್ಜಿ ಸಂಖ್ಯೆ:1579-1585/2017ನ್ನು ಸಲ್ಲಿಸಿದ್ದು, ಸದರಿ ಅರ್ಜಿಯನ್ನು ಮಾನ್ಯ ನ್ಯಾಯ ಮಂಡಳಿಯು ಸರ್ವೋಚ್ಛ ನ್ಯಾಯಾಲಯದ ಸಂವಿಧಾನ ಪೀಠವು ಉಮಾದೇವಿ ಪ್ರಕರಣದಲ್ಲಿ ನೀಡಿರುವ ತೀರ್ಪನ್ನು ಆಧರಿಸಿ ದಿನಾಂಕ:19.05.2020 ರಂದು ತಿರಸ್ಕರಿಸಿ ತೀರ್ಪು ನೀಡಿರುತ್ತದೆ. |

| | | |
|---|---|---|
| | | ಅದರಂತೆ, ಕರ್ನಾಟಕ ಆಡಳಿತ ನ್ಯಾಯಮಂಡಳಿಯು (ಮಾನ್ಯ ಸರ್ವೋಚ್ಚ ನ್ಯಾಯಾಲಯದ ಸಂವಿಧಾನ ಪೀಠವು ಉಮಾದೇವಿ ಪ್ರಕರಣದಲ್ಲಿ ನೀಡಿರುವ ತೀರ್ಪನ್ನು ಆಧರಿಸಿ) ಸೇವಾ ಸಕ್ರಮಾತಿ ಕೋರಿ ಅತಿಥಿ ಉಪನ್ಯಾಸಕರುಗಳು ಸಲ್ಲಿಸಿದ ಅರ್ಜಿಗಳನ್ನು ವಜಾಗೊಳಿಸಿರುವ ಹಿನ್ನೆಲೆಯಲ್ಲಿ ನಿಯಮಾನುಸಾರ ನೇಮಕವಾಗದಿರುವ ಅತಿಥಿ ಉಪನ್ಯಾಸಕರ ನೇಮಕಾತಿಗಳನ್ನು ಸಕ್ರಮಾತಿಗೊಳಿಸಲು ಅವಕಾಶವಿರುವುದಿಲ್ಲ. |

**ಇಡಿ 176 ಡಿಸಿಇ 2020**

(ಡಾ. ಅಶ್ವಥ್ ನಾರಾಯಣ ಸಿ.ಎನ್.)
ಉಪ ಮುಖ್ಯಮಂತ್ರಿಗಳು (ಉನ್ನತ ಶಿಕ್ಷಣ)

ಅನುಬಂಧ

## Department of Collegiate Education
## Guest Faculty District wise Count(2019-20)

| Sl No | DistrictName | Experience | | | | | | | | Total |
|---|---|---|---|---|---|---|---|---|---|---|
| | | 0 | 1 to 5 | 6 to 10 | 11 to 15 | 16 to 20 | 21 to 25 | 25 to 30 | 31 & above | |
| 1 | Bagalkote | 104 | 191 | 144 | 32 | | | | | 471 |
| 2 | Bangalore | 225 | 371 | 133 | 27 | 5 | 2 | 1 | 1 | 765 |
| 3 | Bangalore Rural | 46 | 61 | 39 | 5 | 3 | 2 | | | 156 |
| 4 | Belgaum | 85 | 209 | 207 | 56 | 4 | | | | 561 |
| 5 | Bellary | 185 | 306 | 156 | 51 | 3 | 1 | | | 702 |
| 6 | Bidar | 43 | 98 | 80 | 8 | | | | | 229 |
| 7 | Bijapur | 85 | 117 | 109 | 16 | | | | | 327 |
| 8 | Chamarajanagar | 35 | 97 | 57 | 15 | 3 | | | | 207 |
| 9 | Chickmagalur | 75 | 175 | 153 | 35 | 9 | | | | 447 |
| 10 | Chikkaballapur | 79 | 162 | 87 | 15 | | | | | 343 |
| 11 | Chitradurga | 100 | 259 | 207 | 33 | 7 | 1 | | 1 | 608 |
| 12 | Dakshina Kannada | 98 | 285 | 187 | 29 | | 1 | | | 600 |
| 13 | Davanagere | 97 | 212 | 146 | 25 | 7 | | | | 487 |
| 14 | Dharwad | 75 | 117 | 50 | 17 | 1 | | | | 260 |
| 15 | Gadag | 80 | 129 | 92 | 23 | 4 | 1 | | | 329 |
| 16 | Gulbarga | 84 | 189 | 140 | 22 | 3 | | | | 438 |
| 17 | Hassan | 198 | 453 | 220 | 58 | 19 | 4 | 1 | | 953 |
| 18 | Haveri | 84 | 204 | 134 | 27 | 5 | 1 | 1 | | 456 |
| 19 | Kolar | 138 | 151 | 73 | 32 | 4 | | | | 398 |
| 20 | Koppal | 105 | 195 | 120 | 18 | 3 | | | | 441 |
| 21 | Madikeri | 25 | 56 | 36 | 5 | 1 | 1 | | | 124 |
| 22 | Mandya | 122 | 249 | 171 | 34 | 5 | | | | 581 |
| 23 | Mysore | 291 | 454 | 228 | 50 | 11 | 4 | | | 1038 |
| 24 | Raichur | 75 | 184 | 128 | 26 | | | | | 413 |
| 25 | Ramnagar | 68 | 136 | 61 | 16 | 2 | | | | 283 |
| 26 | Shimoga | 98 | 270 | 224 | 28 | 8 | | | | 628 |
| 27 | Tumkur | 173 | 301 | 193 | 44 | 7 | | | | 718 |
| 28 | Udupi | 83 | 217 | 178 | 29 | 3 | | | | 510 |
| 29 | Uttara Kannada | 117 | 303 | 208 | 33 | 1 | 1 | | | 663 |
| 30 | Yadgir | 57 | 105 | 127 | 20 | 2 | | | | 311 |
| | **Total** | **3130** | **6256** | **4088** | **829** | **120** | **19** | **3** | **2** | **14447** |